# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 2443 |
| ಸದಸ್ಯರ ಹೆಸರು | : | ಶ್ರೀ.ಸಲೀಂ ಅಹಮದ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 23.03.2022 |
| ಉತ್ತರಿಸುವ ಸಚಿವರು | : | ಪಶುಸಂಗೋಪನೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಧಾರವಾಡ, ಹಾವೇರಿ, ಗದಗ್ ಜಿಲ್ಲೆಗಳಲ್ಲಿ ಇರುವ ಪಶು ಚಿಕಿತ್ಸಾ ಕೇಂದ್ರಗಳೆಷ್ಟು; | ಧಾರವಾಡ, ಹಾವೇರಿ, ಗದಗ ಜಿಲ್ಲೆಗಳಲ್ಲಿ ಈ ಕೆಳಕಂಡಂತೆ ಪಶುವೈದ್ಯಕೀಯ ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. |

| ಜಿಲ್ಲೆ | ಪಾಲಿ ಕ್ಲಿನಿಕ್ | ಪಶು ಆಸ್ಪತ್ರೆ | ಪಶು ಚಿಕಿತ್ಸಾಲಯ | ಪ್ರಾ. ಪ.ಚಿ | ಸಂ. ಪ.ಚಿ | ಒಟ್ಟು |
|---|---|---|---|---|---|---|
| ಧಾರವಾಡ | 1 | 11 | 53 | 42 | 5 | 112 |
| ಹಾವೇರಿ | 1 | 19 | 69 | 50 | 7 | 146 |
| ಗದಗ | 1 | 11 | 62 | 8 | 5 | 87 |
| ಒಟ್ಟು | 03 | 41 | 184 | 100 | 17 | 345 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಜಾನುವಾರುಗಳಿಗೆ ಚಿಕಿತ್ಸೆ ನೀಡಲು ಚಿಕಿತ್ಸಾ ಕೇಂದ್ರಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ) | ಈ ಎಲ್ಲಾ ಚಿಕಿತ್ಸಾ ಕೇಂದ್ರಗಳಿಗೆ ಮೂಲಭೂತ ಸೌಕರ್ಯಗಳನ್ನು ಮತ್ತು ಔಷಧಿಗಳನ್ನು ಸರಬರಾಜು ಮಾಡಲಾಗಿದೆಯೇ; | ಧಾರವಾಡ, ಹಾವೇರಿ ಮತ್ತು ಗದಗ ಜಿಲ್ಲೆಯ ಒಟ್ಟು 153 ಸಂಸ್ಥೆಗಳಿಗೆ ನೂತನ ಕಟ್ಟಡಗಳನ್ನು ನಿರ್ಮಿಸಲಾಗಿರುತ್ತದೆ ಹಾಗೂ ಎಲ್ಲಾ ಚಿಕಿತ್ಸಾ ಕೇಂದ್ರಗಳಿಗೆ ಅಗತ್ಯ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗಿರುತ್ತದೆ. ಮಾಹಿತಿ ಈ ಕೆಳಕಂಡಂತೆ ನೀಡಲಾಗಿದೆ. |

| ಜಿಲ್ಲೆ | ಸಂಸ್ಥೆಗಳ ಸಂಖ್ಯೆ | ನೂತನವಾಗಿ ನಿರ್ಮಿಸಿರುವ ಕಟ್ಟಡ ಸಂಖ್ಯೆ |
|---|---|---|
| ಧಾರವಾಡ, | 112 | 44 |
| ಹಾವೇರಿ | 146 | 54 |
| ಗದಗ | 87 | 55 |
| ಒಟ್ಟು | 345 | 153 |

| | | |
|---|---|---|
| | | ಅನುದಾನದ ಲಭ್ಯತೆಯ ಮೇರೆಗೆ ಹಾಗೂ ಜಾನುವಾರು ಸಂಖ್ಯೆಯ ಆಧಾರದ ಮೇಲೆ ಬೇಡಿಕೆ ಪಡೆದು ಔಷಧಿಗಳ ಸರಬರಾಜನ್ನು ಎಲ್ಲಾ ಪಶುವೈದ್ಯಕೀಯ ಸಂಸ್ಥೆಗಳಿಗೆ ಸರಬರಾಜು ಮಾಡಲಾಗುತ್ತದೆ. |
| ಈ) | ಜಾನುವಾರುಗಳಿಗೆ ಚಿಕಿತ್ಸೆ ನೀಡಲು ವೈದ್ಯರುಗಳ ಕೊರತೆ ಇದೆಯೇ; ಇದ್ದಲ್ಲಿ, ವೈದ್ಯರುಗಳನ್ನು ಯಾವಾಗ ಭರ್ತಿ ಮಾಡಲಾಗುವುದು? | ಹೌದು.<br><br>ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆಯಲ್ಲಿ 400 ಪಶುವೈದ್ಯಾಧಿಕಾರಿ ಹುದ್ದೆಗಳನ್ನು ತುಂಬಲು ಸಚಿವ ಸಂಪುಟವು ಅನುಮತಿ ನೀಡಿದ್ದು, ಅದರಂತೆ ನೇಮಕಾತಿ ಪ್ರಕ್ರಿಯೆ ಜಾರಿಯಲ್ಲಿದೆ. ಆಯ್ಕೆ ಪ್ರಕ್ರಿಯೆ ಮುಗಿದ ನಂತರ ಖಾಲಿ ಇರುವ ಪಶುವೈದ್ಯಾಧಿಕಾರಿಗಳ ಹುದ್ದೆಗಳನ್ನು ನೇಮಕ ಮಾಡಲು ಕ್ರಮವಹಿಸಲಾಗುವುದು.<br><br>ಸದ್ಯ ಪಶುವೈದ್ಯಾಧಿಕಾರಿಗಳ ಖಾಲಿ ಇರುವ ಹುದ್ದೆಗೆ ಅಧಿಕ ಪ್ರಭಾರ ವ್ಯವಸ್ಥೆ ಮಾಡಿ ರೈತರ ಜಾನುವಾರುಗಳಿಗೆ ಚಿಕಿತ್ಸೆಗೆ ತೊಂದರೆಯಾಗದ ರೀತಿಯಲ್ಲಿ ಕಾರ್ಯ ನಿರ್ವಹಿಸಲಾಗುತ್ತಿದೆ. |

ಸಂ: ಪಸಂಮೀ ಇ-75 ಪಸಸೇ 2022

(ಪ್ರಭು.ಬಿ.ಚವ್ಹಾಣ್)
ಪಶುಸಂಗೋಪನ ಸಚಿವರು